## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 222
2. ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 16.07.2019
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬಾಗಲಕೋಟೆ ಜಿಲ್ಲೆಯ ಜಮಖಂಡಿ, ಬೆಳಗಾವಿ ಜಿಲ್ಲೆಯ ಅಥಣಿ, ರಾಯಬಾಗ ಮತ್ತು ಕುಡಚಿ ತಾಲ್ಲೂಕುಗಳ ಪ್ರದೇಶದಲ್ಲಿ ಈಗಾಗಲೇ ಹಿಪ್ಪರಗಿ ಅಣೆಕಟ್ಟು ಯೋಜನೆ ಅಸ್ತಿತ್ವಕ್ಕೆ ಬಂದು ಅಣೆಕಟ್ಟಿನಲ್ಲಿ ನೀರು ಸಂಗ್ರಹವಾಗಿದೆಯೇ; (ಮಾಹಿತಿ ನೀಡುವುದು;) | ಹೌದು. ಬ್ಯಾರೇಜಿನಲ್ಲಿ ನೀರನ್ನು ಸಂಗ್ರಹಿಸಲಾಗುತ್ತಿದೆ. |
| ಆ) | ಹಿಪ್ಪರಗಿ ಅಣೆಕಟ್ಟು ಯೋಜನೆಗೆ ಭೂಸ್ವಾಧೀನ ಪಡಿಸಿಕೊಂಡ ಜಮೀನಿಗೆ ಎಷ್ಟು ಭೂ ಪರಿಹಾರ ನೀಡಲಾಗಿದೆ (ಸಂಪೂರ್ಣ ಮಾಹಿತಿ ನೀಡುವುದು) | ಹಿಪ್ಪರಗಿ ಜಲಾಶಯದ ಗರಿಷ್ಠ ಮಟ್ಟ 524.87ಮೀ ಅಡಿಯಲ್ಲಿ ಮುಳುಗಡೆಯಾದ ಜಮೀನು ಒಟ್ಟು ಕ್ಷೇತ್ರ 5483 ಎ. 03 ಗುಂ. ಇದ್ದು, ಇದರಲ್ಲಿ 5450 ಎ. 36 ಗುಂ. ಕ್ಷೇತ್ರಕ್ಕೆ ಅವಾರ್ಡ ಆಗಿದ್ದು, ಇಲ್ಲಿಯವರೆಗೆ ರೂ.71.84 ಕೋಟಿಗಳ ಪರಿಹಾರವನ್ನು ನೀಡಲಾಗಿರುತ್ತದೆ. |
| ಇ) | ಹಿಪ್ಪರಗಿ ಅಣೆಕಟ್ಟೆಯಲ್ಲಿ ಶೇಖರಣೆಯಾಗಿರುವ ನೀರಿನ ಸುತ್ತ (ಪೆರಿಪೇರಿಯಲ್) ಅಣೆಕಟ್ಟಿನ ನೀರಿನ ತುದಿಯಿಂದ ಖಾಸಗಿ ಜಮೀನುಗಳ ಪರಿಸ್ಥಿತಿ ಅಲ್ಲಿನ ರೈತನ ಸಾಗುವಳಿ ಅಥವಾ ವ್ಯವಸಾಯದ ಸಮಗ್ರ ವಸ್ತುಸ್ಥಿತಿಯ ಬಗ್ಗೆ ಮಾಹಿತಿ ನೀಡುವುದು; | ಹಿಪ್ಪರಗಿ ಬ್ಯಾರೇಜಿನ ಗರಿಷ್ಠ ಮಟ್ಟವಾದ 524.87 ಮೀ. ವರೆಗೆ 2004 ರಿಂದ ನೀರನ್ನು ಸಂಗ್ರಹಿಸಲಾಗುತ್ತಿದೆ. ಸದರಿ ಮಟ್ಟದ ಅಡಿಯಲ್ಲಿ ಬರುವ ಜಮೀನನ್ನು ಮುಳುಗಡೆಗಾಗಿ ಭೂಸ್ವಾಧೀನ ಪಡಿಸಿಕೊಳ್ಳಲಾಗಿರುತ್ತದೆ. 524.87 ಮೀ. ಮಟ್ಟದ ಮೇಲಿನ ಜಮೀನುಗಳು ಫಲವತ್ತತೆಯಿಂದ ಕೂಡಿದ್ದು, ಸದರಿ ಜಮೀನುಗಳನ್ನು ರೈತರು ಜಲಾಶಯದ ನೀರನ್ನು ಎತ್ತಿ ಖಾಸಗಿಯಾಗಿ ನೀರಾವರಿಗೆ ಒಳಪಡಿಸಿಕೊಂಡಿರುತ್ತಾರೆ. |
| ಈ) | ಹಿಪ್ಪರಗಿ ಅಣೆಕಟ್ಟಿನ (ಪೆರಿಪೇರಿಯಲ್) ಸುತ್ತ ಭೂ ಸ್ವಾಧೀನಕ್ಕೆ ಒಳಪಟ್ಟ ಮತ್ತು ಒಳಪಡದೆ ಇರುವ ಜಮೀನಿನ ಸ್ಥಿತಿಗತಿಗಳ ಬಗ್ಗೆ ಮಾಹಿತಿ ನೀಡುವುದು? | ಹಿಪ್ಪರಗಿ ಬ್ಯಾರೇಜಿನ ಹಿನ್ನೀರಿಗಾಗಿ ಗರಿಷ್ಠಮಟ್ಟ 524.87 ಮೀಟರ್‌ವರೆಗಿನ ಮುಳುಗಡೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲಾಗಿದ್ದು, ಈ ಜಮೀನುಗಳು ಸಂಪೂರ್ಣವಾಗಿ ನೀರಿನಿಂದ ಆವೃತ್ತವಾಗುತ್ತಿದೆ. ಭೂಸ್ವಾಧೀನಕ್ಕೆ ಒಳಪಡದ ಅಂದರೆ ಗರಿಷ್ಠ ಮಟ್ಟದ ಮೇಲ್ಭಾಗದ ಜಮೀನುಗಳು ಖಾಸಗಿಯಾಗಿ ನೀರಾವರಿಗೆ ಒಳಪಟ್ಟಿರುತ್ತದೆ (ಜಲಾಶಯದ ಹಿನ್ನೀರಿನಿಂದ) ಮೇಲ್ಭಾಗದಲ್ಲಿನ ಕೆಲವು ಗ್ರಾಮಗಳಡಿ ಬರುವ ಜಮೀನುಗಳ ಪೈಕಿ ಹೆಚ್ಚಿನ ನೀರಿನ ಬಳಕೆಯಿಂದ ಅಲ್ಲಲ್ಲಿ ಜಮೀನುಗಳಲ್ಲಿ ಸವಳು-ಜವಳು ಉಂಟಾಗುತ್ತಿದ್ದು ಈ ಕುರಿತು ನಿಗಮದಿಂದ ಸವಳು ಜವಳು ಜಮೀನು ಸುಧಾರಣೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. ಈ ಸಂಬಂಧ ನಂದೇಶ್ವರ ಗ್ರಾಮದಲ್ಲಿ 354.10 ಹೆಕ್ಟೇರ ಜಮೀನಿನ ಸವಳು ಜವಳು ನಿವಾರಣೆ ಕಾಮಗಾರಿ ಕೈಗೆತ್ತಿಕೊಳ್ಳಲಾಗುತ್ತಿದೆ. |

**ಸಂಖ್ಯೆ: ಜಸಂಇ 04 ಡಬ್ಲ್ಯೂಎಲ್‌ಎ 2019**

**(ಡಿ.ಕೆ. ಶಿವಕುಮಾರ್)**
**ಜಲಸಂಪನ್ಮೂಲ ಇಲಾಖೆ**